ಪಾ. ೭–೪–೭೩ । ... ತ್ವಂ ಕೃತಾಕೃತಪ್ರಸಂಗಿತಯಾ ವುಗಾಗಮಸ್ಯ ನಿತ್ಯತ್ವಾದ್ವೃದ್ಧೇಃ ಪೂರ್ವಂ ವುಗಾಗಮಃ । ಯದ್ವಾ । ಇಂಧಿಭವತಿಭ್ಯಾಂ ಚ । ಪಾ. ೧–೨–೬ । ಇತಿ ಲಿಟ ಕಿತ್ತ್ವಾದ್ವೃದ್ಧ್ಯಭಾವಃ । ನ ಚಾಸಿದ್ಧವದತ್ರಾ ಭಾದಿತಿ ತಸ್ಯಾಸಿದ್ಧತ್ವಾದುವಙಾದೇಶಃ ಶಂಕನೀಯಃ । ವುಗ್ಯುಟಾವುಙ್ಯಣೋಃ ಸಿದ್ಧೌ ಭವತಃ । ಪಾ. ೬–೪–೨೨–೧೪ । ಇತಿ ತಸ್ಯ ಸಿದ್ಧತ್ವಾತ್ । ತಿಙ್ಙತಿಙ ಇತಿ ನಿಘಾತಃ ॥ ೩೮ ॥

॥ ಪ್ರತಿಪದಾರ್ಥ ॥

**ವಜ್ರಬಾಹುಃ**—ವಜ್ರಬಾಹುವಾದ । **ಇಂದ್ರಃ**—ಇಂದ್ರನು (ಶತ್ರುನಾಶವಾದ ನಂತರ) । **ಯಾತಃ**—ಜಂಗಮವಾದುದೂ । **ಅವಸಿತಸ್ಯ**—ಸ್ಥಾವರವಾದುದೂ । **ಶಮಸ್ಯ**—ಕೊಂಬುಗಳಿಲ್ಲದೆ ಸಾಧುವಾದುದೂ । **ಶೃಂಗಿಣಃ ಚ**—ಕೊಂಬುಳ್ಳದೂ ಆದ ಪ್ರಾಣಿಗಳಿಂದ ಕೂಡಿದ ಸಮಸ್ತ ಲೋಕಕ್ಕೆಲ್ಲಾ । **ರಾಜಾ**—ದೊರೆ (ಯಾದನು) । **ಸೇದು**—ಅದೇ ಇಂದ್ರನು । **ಚರ್ಷಣೀನಾಂ**—ಮಾನವರಿಗೂ । **ರಾಜಾ**—ದೊರೆಯಾಗಿ । **ಕ್ಷಯತಿ**—ವಾಸಮಾಡುತ್ತಾನೆ (ನೆಲೆಸಿದ್ದಾನೆ) । **ತಾ**—ಇಂತಹ ಸಕಲ ಜಗತ್ತನ್ನೂ । **ನೇಮಿಃ**—ಚಕ್ರದ ಪರಿಧಿಯು । **ಅರಾನ್ ನ**—ಅರಗಳನ್ನು ಸುತ್ತುವರಿದಿರುವಂತೆ । **ಪರಿ ಬಭೂವ**—ಸುತ್ತುವರಿದು ನಿಂತು ಕೊಂಡನು ॥

॥ ಭಾವಾರ್ಥ ॥

ವಜ್ರಬಾಹುವಾದ ಇಂದ್ರನು ಶತ್ರುನಾಶವಾದ ನಂತರ ಜಂಗಮವಾದುದೂ ಸ್ಥಾವರವಾದುದೂ, ಕೊಂಬುಗಳಿಲ್ಲದೆ ಸಾಧುವಾದುದೂ, ಕೊಂಬುಳ್ಳದೂ ಆದ ಪ್ರಾಣಿಗಳಿಂದ ಕೂಡಿದ ಸಕಲ ಲೋಕಕ್ಕೂ ಅಧಿಪತಿಯಾದನು. ಅದೇ ಇಂದ್ರನು ಮಾನವರಿಗೂ ದೊರೆಯಾಗಿದ್ದಾನೆ. ಚಕ್ರದ ಪರಿಧಿಯು ಚಕ್ರದ ಸಮಸ್ತ ಅರಗಳನ್ನೂ ಸುತ್ತುವರಿದಿರುವಂತೆ ಇಂದ್ರನೂ ಸಹ ಸಕಲ ಜಗತ್ತನ್ನೂ ಸುತ್ತುವರಿದು ನಿಂತಿದ್ದಾನೆ.

## English Translation.

Then Indra, the weilder of thunderbolt became the sovereign ruler of all that is movable and immovable, of hornless and horned cattle; and as he resides as the monarch of men he surrounds all these with his protection as dces the felly surrounds the spokes (of a wheel).

॥ ವಿಶೇಷವಿಷಯಗಳು ॥

**ಯಾತಃ—ಗಚ್ಛತಃ** । ಚಲಿಸುವ ವಸ್ತುಗಳು ಎಂದರೆ ಸಂಚಾರಮಾಡಲು ಸಮರ್ಥವಾದ ಜೀವಜಂತು ಪ್ರಾಣಿಗಳು, ಜಂಗಮವಾದ ಜಗತ್ತು movables-

**ಅವಸಿತಸ್ಯ—ಏಕತ್ರೈವ ಸ್ಥಿತಸ್ಯ** । ಒಂದೇಕಡೆಯಲ್ಲಿರುವ ಎಂದರೆ ಚಲಿಸಲಸಮರ್ಥವಾದ ಸ್ಥಾವರ ಜಗತ್ತು. ಪರ್ವತಾದಿಗಳು, ವೃಕ್ಷಗಳು ಇತ್ಯಾದಿ ; immovables.

**ಶಮಸ್ಯ—ಶಾಂತಸ್ಯ** | ಶಾಂತವಾದ ಎಂದರೆ ಸಾಧುವಾದ ಪ್ರಾಣಿಗಳು, ಇತರರಿಗೆ ಹಿಂಸೆಯನ್ನುಂಟು ಮಾಡುವ ಕೊಂಬು ಮೊದಲಾದವುಗಳಿಲ್ಲದ, ಕುದುರೆ ಕತ್ತೆ ಮೊದಲಾದ ಪ್ರಾಣಿಗಳು.

**ಶೃಂಗಿಣಃ**—ಕೊಂಬುಗಳಿರುವ ಗೋವುಗಳು, ಎಮ್ಮೆಗಳು ಮೊದಲಾದ ಪ್ರಾಣಿಗಳು.

**ಸೇದು ರಾಜಾ ಕ್ಷಯತಿ**—ಆ ಇಂದ್ರನೇ ಈ ಸ್ಥಾವರ ಜಂಗಮಾದಿಗಳಿಗೂ ಸಾಧು ಅಸಾಧು ಪ್ರಾಣಿಗಳಿಗೂ ಮನುಷ್ಯರಿಗೂ ಏಕೈಕ ರಾಜನಾಗಿ (ಅಧಿಪತಿ, ಸ್ವಾಮಿ) ವಾಸಮಾಡುವನು ಎಂದರೆ ಮೆರೆಯುವನು.

**ಅರಾನ್ನ ನೇಮಿಃ ಪರಿ ತಾ ಬಭೂವ**—ಚಕ್ರದ ನೇಮಿಯೆಂಬ ಸುತ್ತುಮರವು ಅರಗಳನ್ನು ಸುತ್ತುಕಟ್ಟಿ ಎಲ್ಲವನ್ನೂ ತನ್ನೊಳಗೊಂಡಿರುವಂತೆ ಇಂದ್ರನು ಮೇಲೆ ಹೇಳಿದ ಸ್ಥಾವರ ಜಂಗಮವಾದ ಜಗತ್ತನ್ನೂ, ಮನುಷ್ಯರನ್ನೂ ಪಾಲಿಸುತ್ತಾ ಅವರನ್ನೆಲ್ಲಾ ತನ್ನ ಆಳ್ವಿಕೆಯಲ್ಲಿ ಸೇರಿಸಿಕೊಂಡು ಮೆರೆಯುತ್ತಿರುವನು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಯಾತಃ**—ಯಾ ಪ್ರಾಪಣೇ ಧಾತು. ಅದಾದಿ. ಯಾತಿ ಗಚ್ಛತಿ ಇತಿ ಯಾತ್. **ಲಟಃ ಶತೃಶಾನಚೌ** ಎಂಬುದರಿಂದ ಶತೃ. ಷಷ್ಠೀ ಏಕವಚನದಲ್ಲಿ ಯಾತಃ ಎಂದು ರೂಪವಾಗುತ್ತದೆ. **'ಸಾವೇಕಾಚಃ'** (ಪಾ. ಸೂ. ೬-೧-೧೬೮) ಸೂತ್ರದಿಂದ ಏಕಾಚ್ಚಿನ ಪರದಲ್ಲಿರುವುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸಃ**—ಸಃ ಇತ್ ಎಂದಿರುವಾಗ **'ಸೋಽಚಿಲೋಪೇ ಚೇತ್ ಪಾದಪೂರಣಮ್'** (ಪಾ. ಸೂ ೬-೧-೧೩೪) ಎಂಬುದರಿಂದ ಪಾದಪೂರ್ತಿಯಾಗುವುದಕ್ಕೋಸ್ಕರ ಸಂಹಿತಾವಲ್ಲಿ ತಚ್ಛಬ್ದದ ಪರದಲ್ಲಿರುವ ಸುವಿಗೆ ಲೋಪಬರುತ್ತದೆ. ಸ+ಇತ್ ಎಂದಿರುವಾಗ ಗುಣ.

**ತಾ**—ತಚ್ಛಬ್ದದ ದ್ವಿತೀಯಾ ಬಹುವಚನದ ಶಸ್ಸಿಗೆ **ಜಶ್ಶಸೋಃ ಶಿಃ** ಎಂಬುದರಿಂದ ಶಿ ಆದೇಶ. **ಶಿ ಸರ್ವನಾಮಸ್ಥಾನಮ್** ಎಂಬುದರಿಂದ ಅದಕ್ಕೆ ಸರ್ವನಾಮಸ್ಥಾನ ಸಂಜ್ಞೆ ಇರುವುದರಿಂದ **ನಪುಂಸಕಸ್ಯ ಝಲಚಃ** ಸೂತ್ರದಿಂದ, ತ್ಯದಾದ್ಯತ್ವ ಬಂದಾಗ ನುಮಾಗಮ. **ಸರ್ವನಾಮಸ್ಥಾನೇ**—ಸೂತ್ರದಿಂದ ಉಪಧಾದೀರ್ಘ. ತಾನಿ ಎಂದಿರುವಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ. **ನಲೋಪಃ ಪ್ರಾತಿ**–ಸೂತ್ರದಿಂದ ನಲೋಪ, ತಾ ಎಂದು ರೂಪವಾಗುತ್ತದೆ.

**ಬಭೂವ**—ಭೂ ಸತ್ತಾಯಾಂ ಧಾತು. ಲಿಟ್ಟಿನಲ್ಲಿ ಣಲಾದೇಶ. **ಭುವೋ ವುಕ್‌ಲುಙ್‌ಲಿಟೋಃ** ಎಂಬುದರಿಂದ ವುಕಾಗಮ. ಲಿಣ್ಣಿಮಿತ್ತಕವಾಗಿ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **'ಭವತೇರಃ'** (ಪಾ ಸೂ. ೭-೪-೭೩) ಎಂಬುದರಿಂದ ಅದರ ಉಕಾರಕ್ಕೆ ಅಕಾರಾದೇಶ. **ಅಭ್ಯಾಸೇ ಚರ್ಚ** ಎಂಬುದರಿಂದ ಭಕಾರಕ್ಕೆ ಬಕಾರಾದೇಶ. ಬಭೂವ ಎಂದು ರೂಪವಾಗುತ್ತದೆ ಇಲ್ಲಿ ವುಕಾಗಮ ಬರಬೇಕಾದರೆ ಮೊದಲು ಣಿತ್ ಪ್ರತ್ಯಯ ಪರದಲ್ಲಿರುವುದರಿಂದ **ಅಚೋ ಞ್ಣಿತಿ** ಎಂಬುದರಿಂದ ವೃದ್ಧಿಯು ಪ್ರಾಪ್ತವಾದರೂ ವುಕಾಗಮವು ನಿತ್ಯವಾದುದರಿಂದ ಅದನ್ನು ಬಾಧಿಸಿ ಬರುತ್ತದೆ. **ಕೃತಾಕೃತಪ್ರಸಂಗೀ ಯಃ ಸಃ ನಿತ್ಯಃ** ಎಂದುದರಿಂದ ವೃದ್ಧಿ ಬಂದರೂ ಬಾರದಿದ್ದರೂ ವುಕಾಗಮ ಬರುವುದರಿಂದ ಅದು ನಿತ್ಯಸೂತ್ರವಾಗುತ್ತದೆ. ಅಥವಾ **'ಇಂಧಿಭವತಿಭ್ಯಾಂ ಚ'** (ಪಾ. ಸೂ. ೧-೨-೬) ಸೂತ್ರ

ದಿಂದ ಭೂ ಧಾತುವಿನ ಪರದಲ್ಲಿರುವ ಲಿಟಕ್ಕೆ ಕಿತ್ವವು ವಿಹಿತವಾದುದರಿಂದ **ಕ್ಙಿತಿಚ** ಎಂಬುದರಿಂದ ವೃದ್ಧಿನಿಷೇಧ ಬರುತ್ತದೆ. **ಅಸಿದ್ಧವದತ್ರಾಭಾತ್** ಸೂತ್ರದಿಂದ ಉಕಾಗಮವು ಅಸಿದ್ಧವಾಗುವುದರಿಂದ ಇಲ್ಲಿ **ಅಚಿಶ್ನುಧಾತು-ಭ್ರುವಾಂ** ಸೂತ್ರದಿಂದ ಉವಙಾದೇಶವು ಬರಬೇಕಾಗುತ್ತದೆ. ಇಲ್ಲಿ ಅಜಾದಿ ಪ್ರತ್ಯಯವು ಎರಡು ಸೂತ್ರಕ್ಕೂ ನಿಮಿತ್ತ ವಾದುದರಿಂದ ಸಮಾನಾಶ್ರಯತ್ವವು ಇದೆ. ಆದರೆ **'ವುಗ್ಯುಟಾವುಙ್‌ಯಣೋಃ ಸಿದ್ಧೌ ಭವತಃ'** (ಪಾ. ಸೂ. ೬-೪-೨೨-೧೪) ಎಂಬ ವಾರ್ತಿಕದಿಂದ ಉವಙ್ ವಿಷಯದಲ್ಲಿ ವುಕಾಗಮ ಸಿದ್ಧವೇ ಆಗುವುದರಿಂದ ಉವರ್ಣಾಂತತ್ವ ಇಲ್ಲದಿರುವುದರಿಂದ ಉವಙಾದೇಶ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಎಂಬುದರಿಂದ ನಿಘಾತ ಸ್ವರವು ಬರುತ್ತದೆ. ॥ ೧೫ ॥

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀ ವೀರಬುಕ್ಕಭೂಪಾಲ-ಸಾಮ್ರಾಜ್ಯಧುರಂಧರೇಣ ಸಾಯಣಾಮಾತ್ಯೇನ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ ದ್ವಿತೀಯೋಽಧ್ಯಾಯಃ ಸಮಾಪ್ತಃ.**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಎರಡನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥



